## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 784

ಮಾನ್ಯ ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 20-12-2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

* * *

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ದೇಶದಲ್ಲೇ ಮೊದಲ ಬಾರಿಗೆ ಒಮ್ಮೆಕ್ರಾನ್ ಸೋಂಕು ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ಕಾಣಿಸಿಕೊಂಡು ಆತಂಕಕ್ಕೆ ಕಾರಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಈಗಾಗಲೇ ಕೋವಿಡ್-19 ಸಲುವಾಗಿ ವ್ಯಾಕ್ಸಿನೇಷನ್ ಪಡೆವರಿಗೆ ಇದರ ಅಡ್ಡ ಪರಿಣಾಮಗಳಿವೆಯೇ; ಈ ಬಗ್ಗೆ ತಜ್ಞರ ಅಭಿಪ್ರಾಯಗಳೇನು; | ರಾಜ್ಯದಲ್ಲಿ ಕೋವಿಡ್-19 ಲಸಿಕಾಕರಣದ ನಂತರ ಒಟ್ಟು 3202 ಅಡ್ಡಪರಿಣಾಮಗಳ ಪ್ರಕರಣಗಳು ಕೋವಿನ್ ಪೋರ್ಟಲ್‌ನಲ್ಲಿ ವರದಿಯಾಗಿರುತ್ತವೆ. ಇವುಗಳಲ್ಲಿ 3044 ಸಣ್ಣ ಪ್ರಮಾಣದ, 53 ತೀವ್ರತರವಾದ ಮತ್ತು 105 ಗಂಭೀರ ಪ್ರಕರಣಗಳಾಗಿರುತ್ತವೆ. ಭಾರತ ಸರ್ಕಾರದ ಕಾರ್ಯಾಚರಣೆಯ ಮಾರ್ಗಸೂಚಿಯಲ್ಲಿ ಕೋವಿಡ್-19 ಲಸಿಕಾಕರಣದ ನಂತರ ಉಂಟಾಗಬಹುದಾದ ಸಂಭಾವ್ಯ ಅಡ್ಡ ಪರಿಣಾಮಗಳ ಕುರಿತು ಈ ಕೆಳಕಂಡಂತೆ ತಿಳಿಸಲಾಗಿದೆ.<br>• ಕೋವಿಡ್-19 ಲಸಿಕಾಕರಣದ ನಂತರ ಉಂಟಾಗಬಹುದಾದ ಯಾವುದೇ ಸಂಭಾವ್ಯ ಅನಾವಶ್ಯಕ ವೈದ್ಯಕೀಯ ಪರಿಣಾಮಗಳನ್ನು ಲಸಿಕಾಕರಣದ ನಂತರ ಉಂಟಾಗಬಹುದಾದ ಅಡ್ಡ ಪರಿಣಾಮಗಳೆಂದು (AEFI) ಪರಿಗಣಿಸಲಾಗುತ್ತದೆ.<br>• ಈ ಅಡ್ಡ ಪರಿಣಾಮಗಳನ್ನು ತೀವ್ರತೆಯ ಆಧಾರದ ಮೇಲೆ ಸೂಕ್ಷ್ಮ, ತೀವ್ರ ಹಾಗೂ ಗಂಭೀರ ಎಂದು ವಿಂಗಡಿಸಲಾಗಿದೆ.<br>ಯಾವುದೇ ಲಸಿಕಾಕರಣದ ನಂತರ ಸೂಕ್ಷ್ಮತರವಾದ ಅಡ್ಡ ಪರಿಣಾಮಗಳಾದ ಜ್ವರ, ತಲೆನೋವು, ವಾಂತಿ ಮತ್ತು ಲಸಿಕೆ ನೀಡಿದ ಜಾಗದಲ್ಲಿ ನೋವು ಇವುಗಳು ಸಾಮಾನ್ಯವಾಗಿ ನಿರೀಕ್ಷಿಸಬಹುದಾದ ಅಡ್ಡ ಪರಿಣಾಮಗಳಾಗಿರುತ್ತವೆ ಹಾಗೂ ತೀವ್ರ/ಗಂಭೀರ ಪ್ರಕರಣಗಳು ಅಪರೂಪವಾಗಿ ಸಂಭವಿಸುತ್ತವೆ.<br>ಈ ಪ್ರಕರಣಗಳ ನಿರ್ವಹಣೆ ಮತ್ತು ವರದಿ ಮಾಡುವ ಕುರಿತು ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ. |

....2

| | | |
|---|---|---|
| ಇ | ಈ ಸೋಂಕು ಹರಡದಂತೆ ಸರ್ಕಾರ ಕೈಗೊಳ್ಳಬಹುದಾದ ಮುನ್ನೆಚ್ಚರಿಕೆ ಕ್ರಮಗಳೇನು? | ಈ ಸೋಂಕು ಹರಡದಂತೆ ಸರ್ಕಾರವು ಕೈಗೊಂಡಿರುವ ಕ್ರಮಗಳು ಈ ಕೆಳಗಿನಂತಿವೆ.<br>1. ಭಾರತ ಸರ್ಕಾರದ ಮಾರ್ಗಸೂಚಿಯಂತೆ, ಎಲ್ಲಾ ಅಂತರರಾಷ್ಟ್ರೀಯ ಪ್ರಯಾಣಿಕರು ಕರ್ನಾಟಕಕ್ಕೆ ಆಗಮಿಸುವ ಮೊದಲು 'ಏರ್ ಸುವಿಧಾ" ಪೋರ್ಟಲ್‌ನಲ್ಲಿ, 72 ಗಂಟೆಗಳ ಒಳಗೆ ಮಾಡಿಸಿದ ಆರ್‌ಟಿಪಿಸಿಆರ್ ನೆಗೆಟಿವ್ ವರದಿಯನ್ನು ಅಪ್‌ಲೋಡ್ ಮಾಡುವುದು ಕಡ್ಡಾಯವಾಗಿರುತ್ತದೆ.<br>2. ಭಾರತ ಸರ್ಕಾರವು ಸೂಚಿಸಿರುವ At–Risk ದೇಶಗಳಿಂದ ಆಗಮಿಸುವವರು ವಿಮಾನ ನಿಲ್ದಾಣದಲ್ಲಿ ಆರ್‌ಟಿಪಿಸಿಆರ್ ಪರೀಕ್ಷೆ ಮಾಡಿಸುವುದು ಕಡ್ಡಾಯವಾಗಿದ್ದು, ನೆಗೆಟಿವ್ ಫಲಿತಾಂಶ ಬಂದವರು ಮಾತ್ರವೇ ವಿಮಾನ ನಿಲ್ದಾಣದಿಂದ ತೆರಳಲು ಅವಕಾಶ ನೀಡಲಾಗುವುದು.<br>3. ಆರ್‌ಟಿಪಿಸಿಆರ್ ಪಾಸಿಟಿವ್ ಫಲಿತಾಂಶ ಬಂದವರನ್ನು ಶಿಷ್ಟಾಚಾರದ ಅನ್ವಯ ನಿಗದಿತ ಆಸ್ಪತ್ರೆಗೆ ದಾಖಲು ಮಾಡಿ ಅಗತ್ಯ ಚಿಕಿತ್ಸೆ ನೀಡಲು ವ್ಯವಸ್ಥೆ ಮಾಡಲಾಗಿದೆ.<br>4. ಪಾಸಿಟಿವ್ ಪ್ರಕರಣಗಳ ಸೂಕ್ತ ಚಿಕಿತ್ಸೆಗಾಗಿ ಸರ್ಕಾರಿ ಹಾಗೂ ಖಾಸಗಿ ಆಸ್ಪತ್ರೆಗಳನ್ನು ಗುರುತಿಸಲಾಗಿದ್ದು, ಚಿಕಿತ್ಸಾ ಶಿಷ್ಟಾಚಾರವನ್ನು ಹೊರಡಿಸಲಾಗಿದೆ.<br>5. ಇಂತಹ ಪ್ರಕರಣಗಳ ಮಾದರಿಯನ್ನು ಜೀನೋಮ್ ಸೀಕ್ವೆನ್ಸಿಂಗ್ ಪರೀಕ್ಷೆಗಾಗಿ INSACOG ಪ್ರಯೋಗಶಾಲೆಗೆ ಕಳುಹಿಸಿ ಆದ್ಯತೆಯ ಮೇಲೆ ಪರೀಕ್ಷೆ ಮಾಡಲಾಗುತ್ತಿದೆ.<br>6. ಆರ್‌ಟಿಪಿಸಿಆರ್ ನೆಗೆಟಿವ್ ಫಲಿತಾಂಶ ಬಂದ ಪ್ರಯಾಣಿಕರು ಆಯಾ ಜಿಲ್ಲೆಗಳಲ್ಲಿ ಹೋಂ ಕ್ವಾರೆಂಟೈನ್‌ನಲ್ಲಿದ್ದು ಹಾಗೂ 8ನೇ ದಿನದಂದು ಆರ್‌ಟಿಪಿಸಿಆರ್ ಪರೀಕ್ಷೆ ನಡೆಸಲಾಗುತ್ತಿದೆ. ಇಂತಹ ಪ್ರಕರಣಗಳಲ್ಲಿ ಪಾಸಿಟಿವ್ ಬಂದವರಿಗೆ ಶಿಷ್ಟಾಚಾರದಂತೆ ಚಿಕಿತ್ಸೆ ನೀಡಲಾಗುತ್ತಿದೆ.<br>7. ಉಳಿದಂತೆ, ರಾಜ್ಯಾದ್ಯಂತ ಕೋವಿಡ್ ಲಸಿಕಾ ಕಾರ್ಯಕ್ರಮವನ್ನು ಸಮರೋಪಾದಿಯಲ್ಲಿ ನಡೆಸಲಾಗುತ್ತಿದೆ.<br>8. ಕೋವಿಡ್ 19 ಲಸಿಕೆಯ 2 ಡೋಸ್‌ಗಳನ್ನು ಪಡೆದವರಿಗೆ ಹೊಟೇಲ್, ಲಾಡ್ಜ್, ರೆಸ್ಟೋರೆಂಟ್‌ಗಳು, ಪಬ್, ಬಾರ್, ಸಿನೆಮಾ ಹಾಲ್, ಆಡಿಟೋರಿಯಂಗಳು, ಶಾಪಿಂಗ್ ಕಾಂಪ್ಲೆಕ್ಸ್, ಮಾಲ್‌ಗಳು, ಗ್ರಂಥಾಲಯಗಳು, ಈಜುಕೊಳಗಳು, ಮೃಗಾಲಯಗಳು, ಜೈವಿಕ ಉದ್ಯಾನವನಗಳು ಹಾಗೂ ವಸ್ತು ಪ್ರದರ್ಶನ ಸ್ಥಳಗಳು ಇತ್ಯಾದಿಗಳಲ್ಲಿ ಪ್ರವೇಶ ನೀಡಲಾಗುತ್ತಿದೆ.<br>9. ತಜ್ಞರ ಶಿಫಾರಸ್ಸಿನಂತೆ, ರಾಜ್ಯದ ಆಸ್ಪತ್ರೆಗಳಲ್ಲಿ ಅಗತ್ಯ ಸಂಖ್ಯೆಯ ಬೆಡ್‌ಗಳು, ಐಸಿಯು, ವೆಂಟಿಲೇಟರ್ ಹಾಗೂ ಇತರ ಸೌಲಭ್ಯಗಳನ್ನು ಉನ್ನತೀಕರಿಸಲಾಗಿದೆ.<br>10. ಕೋವಿಡ್ ಪ್ರಕರಣಗಳ ಚಿಕಿತ್ಸೆಗಾಗಿ ಅಗತ್ಯ ಪ್ರಮಾಣದ ಔಷಧಿಗಳನ್ನು ಪೂರೈಸಲಾಗಿದೆ. |

ಸಂಖ್ಯೆ: ಆಕುಕ 784 ಚುರಪ್ರ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು